# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 246

ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 14.12.2021

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂವಿಜ್ಞಾನ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಬಳ್ಳಾರಿ, ತುಮಕೂರು ಮತ್ತು ಚಿತ್ರದುರ್ಗ ಈ ಜಿಲ್ಲೆಗಳ ಗಣಿಭಾದಿತ ಪ್ರದೇಶಗಳಲ್ಲಿ ಗಣಿ ಪರಿಸರ ಪುನಶ್ಚೇತನಕ್ಕಾಗಿ ಗಣಿ ನಿಗಮವನ್ನು ಸ್ಥಾಪನೆ ಮಾಡಲಾಗಿದೆಯೇ, ಹಾಗಿದ್ದಲ್ಲಿ ಯಾವಾಗ ಸ್ಥಾಪನೆ ಮಾಡಲಾಗಿದೆ, ಸದರಿ ನಿಗಮ ಸ್ಥಾಪಿತವಾದ ಉದ್ದೇಶವೇನು; | ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದನ್ವಯ, ರಾಜ್ಯದ ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿನ ಗಣಿಭಾದಿತ ಪ್ರದೇಶಗಳ ಪುನ:ಶ್ಚೇತನದ ಕಾಲಮಿತಿ ಯೋಜನೆಗಳ ಅನುಷ್ಠಾನ/ ಮೇಲುಸ್ತುವಾರಿಗಾಗಿ ವಿಶೇಷ ಉದ್ದೇಶಗಳ ನಿಗಮ (SPV) ಎಂದು, ಕರ್ನಾಟಕ ಗಣಿ ಪರಿಸರ ಪುನ:ಶ್ಚೇತನ ನಿಗಮವನ್ನು ಕಂಪನಿ ಕಾಯಿದೆ (8) ರಡಿಯಲ್ಲಿ ಜೂನ್, 2014 ರಲ್ಲಿ ಸ್ಥಾಪಿಸಲಾಗಿರುತ್ತದೆ. |
| ಆ) | ಸದರಿ ನಿಗಮದಲ್ಲಿ ಹಾಲಿ ಎಷ್ಟು ಅಧಿಕಾರಿ / ಸಿಬ್ಬಂದಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆ; | ನಿಗಮದಲ್ಲಿ ಪ್ರಸ್ತುತ 04 ಅಧಿಕಾರಿಗಳು ಮತ್ತು 06 ಸಿಬ್ಬಂದಿಗಳು ಕೆಲಸ ನಿರ್ವಹಿಸುತ್ತಿದ್ದಾರೆ. |
| ಇ) | ಸದರಿ ನಿಗಮದಿಂದ ಇಲ್ಲಿಯವರೆಗೆ ಗಣಿ ಪರಿಸರ ಪುನಶ್ಚೇತನಕ್ಕಾಗಿ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದನ್ವಯ, ರಾಜ್ಯದ ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳ ಗಣಿಗಾರಿಕೆಯಿಂದ ಬಾಧಿತವಾದ ಪ್ರದೇಶಗಳ ಪರಿಸರ ಅಭಿವೃದ್ಧಿ, ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಮತ್ತು ಗಣಿಗಾರಿಕೆಗೆ ಅವಶ್ಯಕವಾಗಿರುವ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ವಿವಿಧ ಇಲಾಖೆಗಳು ಕೈಗೊಳ್ಳಲು ಉದ್ದೇಶಿಸಿರುವ ಕಾರ್ಯ ಚಟುವಟಿಕೆಗಳನ್ನು ಜಿಲ್ಲಾಡಳಿತ ಗುರುತಿಸಿ ಸರ್ಕಾರದ ಮಟ್ಟದಲ್ಲಿ ಕ್ರೋಢೀಕರಿಸಿ, ಒಟ್ಟು ರೂ.24.996.71 ಕೋಟಿ ಮೊತ್ತದ Comprehensive Environment Plan for Mining Impact Zone (CEPMIZ) ಎಂಬ ಯೋಜನೆಯನ್ನು ತಯಾರಿಸಿ ಅಕ್ಟೋಬರ್, 2018 ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಅನುಮೋದನೆಗಾಗಿ ಸಲ್ಲಿಸಲಾಗಿದೆ. |

| | | |
|---|---|---|
| | | ಈ ಯೋಜನೆಗೆ ಶೀಘ್ರ ನ್ಯಾಯಾಲಯದ ಅನುಮೋದನೆ ಪಡೆಯುವ ಸಂಬಂಧ 3 ಬಾರಿ ಹಿರಿಯ ವಕೀಲರು ಮತ್ತು 7 ಬಾರಿ ಮಾನ್ಯ ಸಾಲಿಸೀಟರ್ ಜನರಲ್ (Solicitor General of India) ರವರಿಂದ ನ್ಯಾಯಾಲಯದ ಮುಂದೆ ಅರಿಕೆ ಮಾಡಲಾಗಿದೆ ಅಲ್ಲದೆ, ಕೇಸು ಶೀಘ್ರ ಕೈಗೆತ್ತಿಕೊಳ್ಳುವಂತೆ ಮಾನ್ಯ ನ್ಯಾಯಾಲಯವನ್ನು ಕೋರಿ 7 Mentioning Application ಸಲ್ಲಿಸಲಾಗಿದೆ. ನ್ಯಾಯಾಲಯದ ಅನುಮೋದನೆ ನಿರೀಕ್ಷಿಸಲಾಗುತ್ತಿದೆ. ಅನುಮೋದನೆ ದೊರೆತ ನಂತರ ಯೋಜನೆಗಳ ಅನುಷ್ಠಾನ ಕಾರ್ಯ ಕೈಗೊಳ್ಳಲಾಗುವುದು. |
| ಈ) | ಸದರಿ ನಿಗಮದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ / ಸಿಬ್ಬಂದಿಗಳ/ವೇತನ, ಕಟ್ಟಡ ಬಾಡಿಗೆ ನಿರ್ವಹಣೆಗಾಗಿ ಇಲ್ಲಿಯವರೆಗೆ ಎಷ್ಟು ವೆಚ್ಚ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಸಂಸ್ಥೆಯಲ್ಲಿ ಕಳೆದ 06 ವರ್ಷಗಳ ಅವಧಿಯಲ್ಲಿ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನಕ್ಕಾಗಿ ರೂ.1,93,83,454/- ಗಳನ್ನು ಮತ್ತು ಕಟ್ಟಡ ಬಾಡಿಗೆಗಾಗಿ ರೂ.1,69,26,810/- ಗಳನ್ನು ವಿನಿಯೊಗಿಸಲಾಗಿದೆ. |
| ಉ) | ಸದರಿ ವೆಚ್ಚವನ್ನು ಯಾವ ಅನುದಾನದಿಂದ ಭರಿಸಲಾಗುತ್ತಿದೆ? (ವಿವರ ನೀಡುವುದು). | ಸರ್ಕಾರದಿಂದ ಕೆ.ಎಂ.ಇ.ಆರ್ ಸಿ ಸಂಸ್ಥೆಗೆ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. 2016ನೇ ಸಾಲಿನಲ್ಲಿ ಸರ್ಕಾರ ಸಾಲವಾಗಿ ರೂ.1.00 ಕೋಟಿ ನೀಡಿರುತ್ತದೆ ಹಾಗೂ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಬಳ್ಳಾರಿ ಜಿಲ್ಲೆಯಲ್ಲಿ 3 ರೈಲ್ವೆ ಸೈಡಿಂಗ್ ಮತ್ತು 02 ಸಬ್‌ಲೈನ್‌ಗಳ DPR ತಯಾರಿಸುವಂತೆ ಅದೇಶಿಸಿದ್ದು, ಈ DPR ಕೆಲಸ ಪ್ರಾರಂಭಿಸಲು ರೂ.10.00 ಕೋಟಿ ಮೊತ್ತವನ್ನು ಕೆ.ಎಂ.ಇ.ಆರ್.ಸಿ. ಸಂಸ್ಥೆಗೆ ಬಿಡುಗಡೆ ಮಾಡುವಂತೆ ಮಾನಿಟರಿಂಗ್ ಕಮಿಟಿಗೆ ಅದೇಶಿಸಿರುತ್ತದೆ. ಅದರಂತೆ, ಮಾನಿಟರಿಂಗ್ ಕಮಿಟಿಯು ಸಂಸ್ಥೆಗೆ 2017 ರಲ್ಲಿ ಈ ಮೊತ್ತವನ್ನು ಬಿಡುಗಡೆ ಮಾಡಿರುತ್ತದೆ. ಮೇಲಿನ ವೆಚ್ಚಗಳನ್ನು ಸದರಿ ಮೊತ್ತಗಳಿಂದ ಭರಿಸಲಾಗಿದೆ. |

**ಸಂಖ್ಯೆ: ಸಿಐ 128 ಸಿಎಂಸಿ 2021**

Halappa B

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಮತ್ತು ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು
ಹಿರಿಯ ನಾಗರೀಕರ ಸಬಲೀಕರಣ ಸಚಿವರು